**ಕರ್ನಾಟಕ ವಿಧಾನ ಪರಿಷತ್ತು**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 427
ಸದಸ್ಯರ ಹೆಸರು : ಶ್ರೀ ಸೂರಜ್ ರೇವಣ್ಣ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವ ದಿನಾಂಕ : 18-02-2022.
ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ರೈತರು ಕೃಷಿ ಜಮೀನಿನಲ್ಲಿ ಮನೆ ನಿರ್ಮಿಸಿಕೊಂಡು ವಾಸಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ | ಬಂದಿದೆ. |
| (ಆ) | ರಾಜ್ಯದಲ್ಲಿ ಇ-ಸ್ವತ್ತಿಗಾಗಿ ರೈತರು ಸಲ್ಲಿಸಿರುವ ಅರ್ಜಿಗಳ ಸಂಖ್ಯೆ ಎಷ್ಟು; (ಗ್ರಾಮ ಪಂಚಾಯತಿವಾರು ಮಾಹಿತಿ ನೀಡುವುದು) | ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ಆಸ್ತಿಯ ಮಾಲೀಕರು ಇ-ಸ್ವತ್ತು ತಂತ್ರಾಂಶದ ಮೂಲಕ ನಮೂನೆ-9 / 11ಎ ಅಥವಾ 11ಬಿ ವಿತರಿಸಲು ಸಲ್ಲಿಸಿರುವ ಅರ್ಜಿಗಳ ಜಿಲ್ಲಾವಾರು ವಿವರವನ್ನು ಅನುಬಂಧದಲ್ಲಿ ನೀಡಿದೆ. |
| (ಇ) | ಹಾಗಿದಲ್ಲಿ, ರೈತರಿಗೆ ಇ-ಸ್ವತ್ತು ಅಡಿ ಇ-ಖಾತಾ ಮಾಡಿಕೊಡಲು ಸರ್ಕಾರ ನಿಗಧಿಪಡಿಸಿರುವ ಮಾನದಂಡಗಳೇನು | ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿನ ಕ್ರಮಬದ್ಧ ಆಸ್ತಿಗಳು ಮತ್ತು ಕ್ರಮಬದ್ಧವಲ್ಲದ ಆಸ್ತಿಗಳಿಗೆ ಆಸ್ತಿಯ ಮಾಲೀಕರು ಸಂಬಂಧಿಸಿದ ದಾಖಲೆಗಳೊಂದಿಗೆ ಇ-ಸ್ವತ್ತು ತಂತ್ರಾಂಶದ ಮೂಲಕ ನಮೂನೆ-9 / 11ಎ ಅಥವಾ 11ಬಿ ನೀಡಲು ಗ್ರಾಮ ಪಂಚಾಯತಿಗಳಿಗೆ ಅರ್ಜಿ ಸಲ್ಲಿಸಿದ್ದಲ್ಲಿ ನಿಯಮಾನುಸಾರ ಪಂಚಾಯತಿ ಅಭಿವೃದ್ಧಿ ಅಧಿಕಾರಿಯು ಡಿಜಿಟಲ್ ಸಹಿಯ ಮೂಲಕ ಆಸ್ತಿ ಗುರುತಿನ ಸಂಖ್ಯೆಯೊಂದಿಗೆ ನಮೂನೆಗಳನ್ನು ವಿತರಿಸಲು ಕ್ರಮ ವಹಿಸುವರು.<br><br>ನಮೂನೆಗಳನ್ನು ವಿತರಿಸುವುದು ಸಕಾಲ ಸೇವೆಯ ಕಾರ್ಯ ವ್ಯಾಪ್ತಿಗೆ ಸೇರ್ಪಟ್ಟಿದ್ದು, 45 ದಿನಗಳೊಳಗೆ ಅರ್ಜಿದಾರರು ನಿಯಮಗಳ ಪ್ರಕಾರ ಎಲ್ಲಾ ದಾಖಲಾತಿಗಳನ್ನು ಅವರು ಒದಗಿಸಿದ್ದಲ್ಲಿ ನೀಡಬೇಕಾಗಿರುತ್ತದೆ.<br><br>ಇ-ಸ್ವತ್ತು ತಂತ್ರಾಂಶದ ಮೂಲಕ ನಮೂನೆ-9, 11ಎ ಮತ್ತು 11ಬಿ ಗಳನ್ನು (ತೆರಿಗೆ ನಿರ್ಧರಣೆ ಪಟ್ಟಿ) ವಿತರಿಸಲು ಗ್ರಾಮ ಪಂಚಾಯತಿ ಸಭೆಯ ಅನುಮೋದನೆ ಅಗತ್ಯವಿದ್ದು, ಸದರಿ ಸಭೆಯನ್ನು ನಿಯಮಿತವಾಗಿ ಮತ್ತು ತ್ವರಿತವಾಗಿ ಮಾಡದ ಕಾರಣ ಮತ್ತು ಅರ್ಜಿಗಳನ್ನು ಜೇಷ್ಠತೆ ಆಧಾರದಲ್ಲಿ ವಿಲೇ ಮಾಡದಿರುವುದರಿಂದ ನಮೂನೆಗಳನ್ನು ವಿತರಿಸಲು ವಿಳಂಬವಾಗುತ್ತಿದ್ದು, ಮೊದಲು ಬಂದ ಅರ್ಜಿಯನ್ನು ಸ್ವೀಕೃತಿ ದಿನಾಂಕದ ಆಧಾರದ ಮೇಲೆ ಮೊದಲು ಇತ್ಯರ್ಥಪಡಿಸಲು (First In First Out-FIFO) ಕ್ರಮ ವಹಿಸುವಂತೆ ಹಾಗೂ ಸಕಾರಣವಿಲ್ಲದೆ ಅರ್ಜಿಗಳನ್ನು ತಿರಸ್ಕರಿಸುವುದು ಮತ್ತು ವಿಲೇ ಇಡದಂತೆ ಗ್ರಾಮ ಪಂಚಾಯತಿಗಳಿಗೆ ಸೂಚಿಸಲಾಗಿದೆ. |

| | | |
|---|---|---|
| | | ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿನ ಆಸ್ತಿಗಳಿಗೆ ಇ-ಸ್ವತ್ತು ತಂತ್ರಾಂಶದ ಮೂಲಕ ನಮೂನೆ-9, 11ಎ ಮತ್ತು 11ಬಿ ಗಳನ್ನು ವಿತರಿಸಲು ಅವಶ್ಯಕವಾಗಿರುವ ದಾಖಲೆಗಳ ಚೆಕ್‌ಲಿಸ್ಟ್‌ಗಳನ್ನು ಗ್ರಾಮ ಪಂಚಾಯತಿಗಳ ಸೂಚನಾ ಫಲಕಗಳಲ್ಲಿ ಕಡ್ಡಾಯವಾಗಿ ಅಳವಡಿಸುವ ಬಗ್ಗೆ ಕ್ರಮ ವಹಿಸುವಂತೆ ಗ್ರಾಮ ಪಂಚಾಯತಿಗಳ ಪಂಚಾಯತಿ ಅಭಿವೃದ್ಧಿ ಅಧಿಕಾರಿಗಳಿಗೆ ತಿಳಿಸಿದೆ. |
| (ಈ) | ಮಾನದಂಡಗಳಿದ್ದಲ್ಲಿ, ಇ-ಸ್ವತ್ತು ಅಡಿ ಇ-ಖಾತಾ ಮಾಡಿಸಿಕೊಳ್ಳಲು ರೈತರುಗಳಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಆಸ್ತಿಯ ಮಾಲೀಕರು ಅಗತ್ಯ ದಾಖಲಾತಿಗಳನ್ನು ಸಲ್ಲಿಸದಿರುವುದು ಮತ್ತು ತಾಂತ್ರಿಕ ದೋಷದಿಂದಾಗಿ ಕೆಲವು ಪ್ರಕರಣಗಳಲ್ಲಿ ಇ-ಸ್ವತ್ತು ತಂತ್ರಾಂಶದ ಮೂಲಕ ನಮೂನೆಗಳನ್ನು ವಿತರಿಸಲು ತೊಂದರೆಯಾಗಿರುತ್ತದೆ. |
| (ಉ) | ಮಾನದಂಡಗಳಿದ್ದಲ್ಲಿ, ಇ-ಸ್ವತ್ತು ಅಡಿ ಇ-ಖಾತಾ ಮಾಡಿಕೊಡದೇ ಇರುವ ಅಧಿಕಾರಿಗಳು / ನೌಕರರು ವಿರುದ್ಧ ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು) | ಸಕಾರಣವಿಲ್ಲದೆ ಅರ್ಜಿಗಳನ್ನು ತಿರಸ್ಕರಿಸಿದ್ದಲ್ಲಿ ಅಥವಾ ವಿಲೇ ಇಟ್ಟಲ್ಲಿ ಸಂಬಂಧಿಸಿದ ಗ್ರಾಮ ಪಂಚಾಯತಿಯ ಪಂಚಾಯಿತಿ ಅಭಿವೃದ್ಧಿ ಅಧಿಕಾರಿ, ಗ್ರಾಮ ಪಂಚಾಯಿತಿ ಕಾರ್ಯದರ್ಶಿಗಳು ಹಾಗೂ ದ್ವಿತೀಯ ದರ್ಜೆ ಲೆಕ್ಕ ಸಹಾಯಕರ ವಿರುದ್ಧ ಕರ್ನಾಟಕ ಸಿವಿಲ್ ಸೇವಾ (ಸಿ.ಸಿ.ಎ) ನಿಯಮಗಳು, 1957 ರನ್ವಯ ನಿಯಮಾನುಸಾರ ಜಿಲ್ಲಾ ಪಂಚಾಯಿತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಶಿಸ್ತು ಕ್ರಮ ಜರುಗಿಸುವಂತೆ ಹಾಗೂ ಗ್ರಾಮ ಪಂಚಾಯತಿ ಅಧ್ಯಕ್ಷರು, ಉಪಾಧ್ಯಕ್ಷರು ಮತ್ತು ಸದಸ್ಯರುಗಳ ವಿರುದ್ಧ ದುವರ್ತನೆ ಎಂದು ಪರಿಗಣಿಸಿ ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ, 1993 ರಡಿ ಗ್ರಾಮ ಪಂಚಾಯತಿ ಅಧ್ಯಕ್ಷ, ಉಪಾಧ್ಯಕ್ಷ ಮತ್ತು ಸದಸ್ಯತ್ವ ಸ್ಥಾನದಿಂದ ತೆಗೆದುಹಾಕಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸುವಂತೆ ಸಹ ತಿಳಿಸಲಾಗಿದೆ. |

ಸಂ. ಗ್ರಾಅಪ 55 ಗ್ರಾಪಂಅ 2022

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

ವಿಧಾನ ಪರಿಷತ್ತಿನ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:427 ಕ್ಕೆ ಅನುಬಂಧ

| Sl.No | District Name | TOTAL No of FORM-9/11A Applications | TOTAL No of FORM-11B Applications |
|---|---|---|---|
| 1 | ಬಾಗಲಕೋಟೆ | 87145 | 5934 |
| 2 | ಬೆಂಗಳೂರು | 243416 | 76126 |
| 3 | ಬೆಂಗಳೂರು ಗ್ರಾಮಾಂತರ | 84975 | 43032 |
| 4 | ಬೆಳಗಾವಿ | 98449 | 36713 |
| 5 | ಬಳ್ಳಾರಿ | 64091 | 26896 |
| 6 | ಬೀದರ್ | 42554 | 13951 |
| 7 | ವಿಜಯಾಪುರ | 63934 | 1463 |
| 8 | ಚಾಮರಾಜನಗರ | 40237 | 9530 |
| 9 | ಚಿಕ್ಕಮಗಳೂರು | 53299 | 7288 |
| 10 | ಚಿತ್ರದುರ್ಗ | 84128 | 13117 |
| 11 | ದಕ್ಷಿಣ ಕನ್ನಡ | 149206 | 14118 |
| 12 | ದಾವಣಗೆರೆ | 61903 | 7017 |
| 13 | ಧಾರವಾಡ | 42549 | 1485 |
| 14 | ಗದಗ | 59921 | 5918 |
| 15 | ಕಲಬುರಗಿ | 67287 | 35010 |
| 16 | ಹಾಸನ | 86921 | 12114 |
| 17 | ಹಾವೇರಿ | 53107 | 2465 |
| 18 | ಕೊಡಗು | 13572 | 4782 |
| 19 | ಕೋಲಾರ | 69674 | 34924 |
| 20 | ಕೊಪ್ಪಳ | 69979 | 13463 |
| 21 | ಮಂಡ್ಯ | 95417 | 36882 |
| 22 | ಮೈಸೂರು | 128233 | 82862 |
| 23 | ರಾಯಚೂರು | 53379 | 16280 |
| 24 | ಶಿವಮೊಗ್ಗ | 70555 | 9531 |
| 25 | ತುಮಕೂರು | 106847 | 61265 |
| 26 | ಉಡುಪಿ | 94366 | 10478 |
| 27 | ಉತ್ತರ ಕನ್ನಡ | 17100 | 7344 |
| 28 | ಚಿಕ್ಕಬಳ್ಳಾಪುರ | 89404 | 13161 |
| 29 | ರಾಮನಗರ | 67675 | 30397 |
| 30 | ಯಾದಗಿರಿ | 38296 | 2486 |
| | **Total:** | **2297619** | **636032** |